## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 753

ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 05.03.2021

| | ಪ್ರಶ್ನೆ | ಉತ್ತರ |
|---|---|---|
| ಅ) | ಬಿ.ಎಂ.ಟಿ.ಸಿ. ಬಸ್ ನಿಲ್ದಾಣಗಳಲ್ಲಿ ಶೆಲ್ಟರ್‌ಗಳನ್ನು ಎಲ್ಲಾ ಕಡೆಗಳಲ್ಲಿ ನಿರ್ಮಾಣ ಮಾಡಲಾಗಿದೆಯೇ;<br>ನಿರ್ಮಿಸದಿದ್ದರೆ ಯಾವಾಗ ನಿರ್ಮಾಣ ಮಾಡಲಾಗುವುದು; | ಬೆಂ.ಮ.ಸಾ.ಸಂಸ್ಥೆಯಲ್ಲಿ 10 ಟಿಟಿಎಂಸಿ, 02 ದೊಡ್ಡ ಬಸ್ ನಿಲ್ದಾಣಗಳು ಮತ್ತು 44 ಮಧ್ಯಮ/ಸಣ್ಣ ಬಸ್ ನಿಲ್ದಾಣಗಳನ್ನು ಹೊಂದಿದ್ದು, ಸದರಿ ನಿಲ್ದಾಣಗಳಲ್ಲಿ ಶೆಲ್ಟರ್‌ಗಳನ್ನು ನಿರ್ಮಿಸಲಾಗಿರುತ್ತದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯವತಿಯಿಂದ ಪಿಪಿಪಿ ಮಾದರಿಯಲ್ಲಿ ಡಿಬಿಓಟಿ ಆಧಾರದ ಮೇಲೆ 5 ವರ್ಷಗಳ ನಿರ್ವಹಣಾ ಅವಧಿಗೆ 280 ಬಸ್ ಶೆಲ್ಟರ್‌ಗಳ ನಿರ್ಮಾಣಕ್ಕೆ ಗುತ್ತಿಗೆ ನೀಡಿದ್ದು, ಅದರಲ್ಲಿ 254 ಬಸ್ ಶೆಲ್ಟರ್‌ಗಳನ್ನು ನಿರ್ಮಿಸಲಾಗಿರುತ್ತದೆ. ಪ್ರಸ್ತುತ<br>20 ವರ್ಷಗಳ ನಿರ್ವಹಣಾ ಅವಧಿಗೆ ಪ್ಯಾಕೇಜ್ ಎ, ಬಿ, ಸಿ & ಡಿ ಗಳಿಂದ ಒಟ್ಟು 1200 ಬಸ್ ತಂಗುದಾಣಗಳ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದ್ದು, ಅದರಲ್ಲಿ 890 ಬಸ್ ತಂಗುದಾಣಗಳನ್ನು ನಿರ್ಮಿಸಲಾಗಿರುತ್ತದೆ. |
| ಆ) | ಬಿ.ಎಂ.ಟಿ.ಸಿ. ಬಸ್ಸುಗಳಲ್ಲಿ ಪ್ರಥಮ ಚಿಕಿತ್ಸಾ ಕಿಟ್‌ಗಳನ್ನು ಅಳವಡಿಸಲಾಗಿದೆಯೇ;<br>ಅಳವಡಿಸದಿದ್ದರೆ ಯಾವಾಗ ಅಳವಡಿಸಲಾಗುವುದು; | ಬಿ.ಎಂ.ಟಿ.ಸಿ.ಯ ಎಲ್ಲಾ ಬಸ್ಸುಗಳಲ್ಲಿ ಕೇಂದ್ರ ಮೋಟಾರು ವಾಹನ ಕಾಯ್ದೆ ಅನ್ವಯ ಕಡ್ಡಾಯವಾಗಿ ಪ್ರಥಮ ಚಿಕಿತ್ಸಾ ಕಿಟ್‌ಗಳನ್ನು ಹಾಗೂ ಸಂಬಂಧಪಟ್ಟ ಔಷಧಗಳನ್ನು (ಕ್ರೀಮ್, ಬ್ಯಾಂಡೇಜ್ ಮತ್ತು ಇನ್ನಿತರೆ ಸಲಕರಣೆಗಳನ್ನು) ಅಳವಡಿಸಲಾಗಿರುತ್ತದೆ.<br><br>ಮುಂದುವರೆದು, ಪ್ರತಿ ರಹದಾರಿ ನವೀಕರಣ ಸಮಯದಲ್ಲಿಯೂ ಸಹ ಕಡ್ಡಾಯವಾಗಿ ಸಂಸ್ಥೆಯ ಬಸ್ಸುಗಳಿಗೆ ಪ್ರಥಮ ಚಿಕಿತ್ಸಾ ಕಿಟ್‌ಗಳನ್ನು ಹಾಗೂ ಸಂಬಂಧಪಟ್ಟ ಔಷಧಗಳನ್ನು ಅಳವಡಿಸಲಾಗುತ್ತಿದೆ. |
| ಇ) | ಬಿ.ಎಂ.ಟಿ.ಸಿ. ಬಸ್ಸುಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರಲ್ಲಿ ಕೊರೋನ ವೈರಸ್ ಹರಡದಂತೆ ಯಾವ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳಲಾಗಿದೆ?<br>(ವಿವರಗಳನ್ನು ನೀಡುವುದು) | ಬಿ.ಎಂ.ಟಿ.ಸಿ. ಬಸ್ಸುಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರಲ್ಲಿ ಕೊರೋನ ವೈರಸ್ ಹರಡದಂತೆ ಈ ಕೆಳಕಂಡ ಮುನ್ನೆಚ್ಚರಿಕೆ ಕ್ರಮಗಳನ್ನು ಅನುಸರಿಸಲಾಗಿರುತ್ತದೆ:<br>➢ ಪ್ರಯಾಣಿಕರು ಪ್ರಯಾಣಿಸುವಾಗ ಮುಖಗವಸು ಧರಿಸುವುದು ಕಡ್ಡಾಯಗೊಳಿಸಲಾಗಿರುತ್ತದೆ.<br>➢ ಸಾರ್ವಜನಿಕ ಬಸ್ಸುಗಳಲ್ಲಿ ಸಾಮಾಜಿಕ ಅಂತರವನ್ನು ಕಾಪಾಡುವ ಸಂಬಂಧ, ಬಸ್ಸುಗಳಲ್ಲಿ ಲಭ್ಯವಿರುವ ಆಸನಗಳ ಸಂಖ್ಯೆಯಷ್ಟು ಪ್ರಯಾಣಿಕರನ್ನು ಮಾತ್ರ ಅನುಮತಿಸಲಾಗಿರುತ್ತದೆ. |

...2

| | | |
|---|---|---|
| | | ➢ ಪ್ರತಿದಿನ ಕಾರ್ಯಾಚರಣೆಗೊಳ್ಳುವ ಬಸ್ಸುಗಳನ್ನು MOHFW ನಿಯಮಾವಳಿಯಂತೆ ಪ್ರಯಾಣಿಕರಿಂದ ಹೆಚ್ಚಿನ ಸಂಪರ್ಕಕ್ಕೆ ಒಳಗಾಗುವ ಬಸ್ಸಿನ ಒಳಭಾಗವಾದ Door Handle, Door Partition, Bonnet Partition, Driver partition, Stanchion poles, Grab Rail, Passenger Seat/ Hand/ Arm rest/ Head Rest Grip, Hand Rails, Louver/ Window Glasses etc., ಹಾಗೂ ಹೊರಭಾಗವನ್ನು ಶುದ್ಧವಾದ ನೀರು, ಸೋಪ್ ದ್ರಾವಣ ಹಾಗೂ ಸೋಂಕು ನಿವಾರಕ ದ್ರಾವಣ (ಸೋಡಿಯಮ್ ಹೈಪೋಕ್ಲೋರೈಟ್) ದ್ರಾವಣದಿಂದ ಸ್ವಚತೆಗೆ ಒಳಪಡಿಸಲಾಗುತ್ತಿದೆ.<br>➢ ಸಿಬ್ಬಂದಿಗಳು ಪ್ರತಿದಿನ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಮಯದಲ್ಲಿ ದೇಹದ ಉಷ್ಣಾಂಶವನ್ನು (temperature) ಮತ್ತು ಆಕ್ಸಿಜನ್ ಮಟ್ಟವನ್ನು (Oximeter) ಪರೀಕ್ಷಿಸಿ, ನಂತರ ಕರ್ತವ್ಯಕ್ಕೆ ನಿಯೋಜಿಸಲಾಗಿರುತ್ತದೆ.<br>➢ ಪ್ರಯಾಣಿಕರ ಸುರಕ್ಷತೆ ಹಾಗೂ ಚಾಲನಾ ಸಿಬ್ಬಂದಿಗಳ ಆರೋಗ್ಯವನ್ನು ಕಾಪಾಡುವ ನಿಟ್ಟಿನಲ್ಲಿ ಕರ್ತವ್ಯದ ಅವಧಿಯಲ್ಲಿ ಸಿಬ್ಬಂದಿಗಳು ಮುಖಗವಸನ್ನು ಧರಿಸುವುದು ಕಡ್ಡಾಯವಾಗಿರುತ್ತದೆ ಹಾಗೂ ಕೈಗಳ ಶುಚಿತ್ವವನ್ನು ಕಾಪಾಡಿಕೊಳ್ಳಲು ಸ್ಯಾನಿಟೈಸರ್‌ನ್ನು ವಿತರಿಸಿ ಬಳಸುವಂತೆ ತಿಳಿಸಲಾಗಿರುತ್ತದೆ.<br>➢ ಸಾರ್ವಜನಿಕ ಪ್ರಯಾಣಿಕರು ಚಾಲಕರೊಂದಿಗೆ ಅಂತರ ಕಾಪಾಡಿಕೊಳ್ಳಲು, ಬಸ್ಸಿನಲ್ಲಿ ಚಾಲಕರಿಗೆ ಪ್ರತ್ಯೇಕ ಕ್ಯಾಬಿನ್ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ.<br>➢ ಪ್ರಯಾಣಿಕರು ಹಾಗೂ ನಿರ್ವಾಹಕರ ನಡುವೆ ನಗದು ವ್ಯವಹಾರವನ್ನು ಕಡಿಮೆಗೊಳಿಸುವ ನಿಟ್ಟಿನಲ್ಲಿ ಪ್ರಯಾಣ ದರ ರೂ.5/-ರ ಗುಣಕದಲ್ಲಿ ನಿಗದಿಪಡಿಸಿ ಪುನರ್‌ರಚಿತ ಪ್ರಯಾಣದರಗಳನ್ನು ಆಕರಿಸಲಾಗುತ್ತಿದೆ ಹಾಗೂ ಡಿಜಿಟಲ್ ಟಿಕೇಟಿಂಗ್ (QR code based) ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗಿರುತ್ತದೆ. |

ಸಂಖ್ಯೆ: ಟಿಡಿ 62 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು